## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1128 (1351)

ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 18.03.2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಕರಾವಳಿಯ ಜಿಲ್ಲೆಗಳಲ್ಲಿ ಮೂಲಗೇಣಿ ಪದ್ಧತಿಯ ರದ್ಧತಿ ಬಗ್ಗೆ ಕಾನೂನು ರಚಿಸಿದ್ದರೂ, ಇನ್ನೂ ಈ ಸಮಸ್ಯೆಯನ್ನು ಇತ್ಯರ್ಥ ಪಡಿಸುವಲ್ಲಿ ಸರ್ಕಾರ ಕ್ರಮಕೈಗೊಳ್ಳದಿರಲು ಕಾಣಗಳೇನು; ಪ್ರಸ್ತುತ ಯಾವ ಹಂತದಲ್ಲಿದೆ: (ವಿವರ ನೀಡುವುದು) | ಮೂಲಗೇಣಿ ಅಥವಾ ಒಳಮೂಲಗೇಣಿದಾರರಿಗೆ ಮಾಲೀಕತ್ವನ್ನು ಪ್ರಧಾನ ಮಾಡಲು "ಕರ್ನಾಟಕ ಮೂಲಗೇಣಿ ಅಥವಾ ಒಳಮೂಲಗೇಣಿದಾರರಿಗೆ ಮಾಲೀಕತ್ವನ್ನು ಪ್ರಧಾನ ಮಾಡುವ ಅಧಿನಿಯಮ, 2011" ಅನ್ನು ದಿನಾಂಕ: 25.07.2012 ರಂದು ಸರ್ಕಾರವು ರಾಜ್ಯ ಪತ್ರದಲ್ಲಿ ಪ್ರಕಟಿಸಿತ್ತು. ಈ ಅಧಿನಿಯಮದ ಉಪ ಬಂಧಗಳು ದಿನಾಂಕ: 20.12.2012 ರಿಂದ ಜಾರಿಗೆ ಬಂದಿರುತ್ತವೆ. ಸದರಿ ಕಾಯ್ದೆಯನ್ನು ಅನುಷ್ಠಾನಗೊಳಿಸಲು ದಿನಾಂಕ: 07.11.2016 ರಂದು "ಕರ್ನಾಟಕ ಮೂಲಗೇಣಿ ಅಥವಾ ಒಳಮೂಲಗೇಣಿದಾರರಿಗೆ ಮಾಲೀಕತ್ವನ್ನು ಪ್ರಧಾನ ಮಾಡುವ ನಿಯಮಗಳು, 2016" ಅನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ರಾಜ್ಯ ಪತ್ರದಲ್ಲಿ ಅಧಿಕೃತವಾಗಿ ಪ್ರಕಟಿಸಿರುತ್ತದೆ.<br><br>ಪ್ರಸ್ತುತ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 11158-66/2013 ಮತ್ತು 62434/2016 ರಲ್ಲಿ ಕ್ರಮವಾಗಿ ದಿನಾಂಕ: 14.12.2016 ರಂದು ಮತ್ತು ದಿನಾಂಕ: 15.12.2016 ರಂದು 'Status-quo' ಎಂದು ಆದೇಶ ಮಾಡಿದ್ದು, ಪ್ರಕರಣ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುತ್ತದೆ. |
| (ಆ) | ನ್ಯಾಯಾಲಯದಲ್ಲಿ ವಾದ ಮಾಡಲು ಹೆಚ್ಚುವರಿ ವಕೀಲರನ್ನು ನೇಮಿಸದೇ ಈ ಪ್ರಕರಣ ನ್ಯಾಯಾಲಯದಲ್ಲಿ ಇತ್ಯರ್ಥಪಡಿಸಲು ಕ್ರಮಕೈಗೊಂಡಿಲ್ಲ ಎಂಬ ದೂರುಗಳಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು;(ವಿವರ ನೀಡುವುದು) | ಮಾನ್ಯ ಉಚ್ಚ ನ್ಯಾಯಾಲಯವು 'Status-quo' ಎಂದು ಆದೇಶ ಮಾಡಿದ್ದು, ಅದನ್ನು ತೆರವುಗೊಳಿಸಲು ಹಾಗೂ ಪ್ರಕರಣ ಶೀಘ್ರವಾಗಿ ಇತ್ಯರ್ಥಪಡಿಸಲು ಕ್ರಮ ಕೈಗೊಳ್ಳುವಂತೆ ಸರ್ಕಾರಿ ವಕೀಲರನ್ನು ಕೋರಲಾಗಿದೆ. |

| | | |
|---|---|---|
| (ಇ) | ಮೂಲಗೇಣಿದಾರರು ಮೂಲಿದಾರರು ಸರ್ಕಾರದ ಕಾನೂನನ್ನು ಜಾರಿಗೊಳಿಸದಂತೆ ಒತ್ತಡ ಹೇರುವುದನ್ನು ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮವೇನು? (ವಿವರ ನೀಡುವುದು) | ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಇತ್ಯರ್ಥವಾದ ನಂತರ ಕೂಡಲೇ ಅಗತ್ಯ ಕ್ರಮವಹಿಸಲಾಗುವುದು. |

ಸಂಖ್ಯೆ: ಕಂಇ 8 ಎಲ್‌ಆರ್‌ಎಸ್ 2020

(ಆರ್. ಅಶೋಕ)
ಮಾನ್ಯ ಕಂದಾಯ ಸಚಿವರು